॥ ಸಿಂಗನ್ನಡಂ ಗೆಲ್ಗೆ ॥

# ಹಳ್ಳಿಯ ಹಾಡುಗಳು.


ರಚಿಸಿದವರು

ಶ್ರೀ ನಿಜಲಿಂಗಪ್ಪಾ ರಾಚಪ್ಪಾ ಕುಬಸದ.
ಅರ್ಗನಾಯ್ಝರ (ಸಂಘಟಿಕರು) ಜಿಲ್ಹಾ ಅಬಕಾರಿ, ಮತ್ತು
ಪಾನನಿರೋಧ ಸಮಿತಿಯ ಸಂಸ್ಕಾರ ಕೇಂದ್ರ
ಹುಬ್ಬಳ್ಳಿ







ಪ್ರಕಾಶಕರು :

ಎ ಎಮ್. ಕೆರಡಿ ಬುಕ್ ಸೇಲರ
ಸ್ಟೇಶನ್ ರೋಡ ಹುಬ್ಬಳಿ

೧೯೫೫

೦—೬—೦

# ಹಳ್ಳಿಯ ಹಾಡುಗಳ

## ಅಭಿಪ್ರಾಯ

ಶ್ರೀಮಾನ್ ನಿಜಲಿಂಗಪ್ಪಾ ರಾಚಪ್ಪಾ ಕುಬಸದ ಅವರು ಪ್ರಕಟಿಸಿದ ಏಕಾಂಕ ನಾಟಕಗಳು ಹಾಗೂ ಹಳ್ಳಿಯಹಾಡುಗಳು ಎಂಬ ಪುಸ್ತಕವನ್ನು ಓದಿ ನನ್ನ ಹೃದಯವು ಅರಳಿತು ಇದೇ ರೀತಿಯಾಗಿ ಅವರ ಕೃತಿಗಳನ್ನು ಓದಿದವರ, ಹಾಗೂ ಕೇಳಿದವರ ಹೃದಯಗಳು ಹಿಗ್ಗುವದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಅವರ ಕಾವ್ಯದಲ್ಲಿ ಸೂಕ್ಷ್ಮ ಅನುಭವಶಕ್ತಿ ಇದೆ ಪ್ರತಿಭೆ ಇದೆ ಅವರ ಕಾವ್ಯಾಭ್ಯಾಸದಿಂದ ಮನೋರಂಜನೆ ಆಗುವದಲ್ಲದೆ ಕಾರ್ಯಪ್ರೇರಕಶಕ್ತಿ ಪ್ರತಿಯೊಬ್ಬ ಓದುಗನಲ್ಲಿ ತಲೆದೋರಲೇಬೇಕು. ಕವಿಯಾದವರಿಗೆ ಸಾಮಾನ್ಯವಾಗಿ ತಾನು ಬರೆದ ಕವನಗಳನ್ನು ಸ್ಫೂರ್ತಿದಾಯಕವಾಗಿ ಪರಿಣಾಮಕಾರಕವಾಗುವಂತೆ ಅನ್ನಲು ಬರುವಂತಿರುವದಿಲ್ಲ ಆದರೆ ಈ ಕವಿಗಳ ವೈಶಿಷ್ಟ್ಯವೆಂದರೆ ಅವರು ಬರೆದ ಕವನಗಳನ್ನು ಅವರು ಭಾವನಾಪ್ರದವಾಗಿ ಹೃದಯಸ್ಪರ್ಶವಾಗುವಂತೆ ಹಾಡಬಲ್ಲರು. ನಾಡಿ ಜನತೆಯನ್ನು ತಣಿಸಬಲ್ಲರು ಅವರು ಬರೆದ ಹಾಡಿನ ಕವನಗಳು ಹೆಚ್ಚಾಗಿ ವೀರಗೀತೆಗಳು ವೀರಗೀತೆಗಳು ಕನ್ನಡ ನಾಡು-ನುಡಿಯ ಟಗ್ಗೆ ಅಭಿಮಾನ ಹುಟ್ಟಿಸುವಂತಹವು ಈ ಕನ್ನಡ ಕವಿಯ ಜೀವನವು ನಿಜವಾಗಿಯೂ ಉಜ್ವಲವಾಗಿದೆ. ಕನ್ನಡಿಗರು ಈ ಕವಿಯ ಕಾವ್ಯಸ್ಫೂರ್ತಿಯು ಇನ್ನೂ ಹೆಚ್ಚಾಗಿ ಹೊರಹೊಮ್ಮುವಂತೆ ಪ್ರೋತ್ಸಾಹಿಸಬೇಕಾಗಿ ಬಿನ್ನಹ.

**ವೀರೇಶ ಹಿರೇಮಠ**
ಬಿ. ಎ. ಬಿ. ಟಿ
ಧಾರವಾಡ

---

**ಪ್ರಕಾಶಕರು:— ಎ. ಎಮ್. ಕರಡಿ ಬುಕ್ ಸೆಲ್ಲರ್ ಪಬ್ಲಿಷರ್ ಹುಬ್ಬಳ್ಳಿ**
**ಮುದ್ರಕರು:— ಮಲ್ಲಿಕಾರ್ಜುನ ಪ್ರಿಂಟಿಂಗ್ ಪ್ರೆಸ್ ಹುಬ್ಬಳ್ಳಿ.**

## ಮಹಾತ್ಮರ ಕಥೆ






## ೧.

## ಬೀಸವಾಗ ಹಾಡುವ ಪದ

ಧಾಟಿ 'ಲಿಂಬಿಯ ವನದಾಗ ಚಂದ್ರಾವು ಚಂಡಾಡಿದ' ಎಂಬಂತೆ

ಬೀಸಾಕ ಕುಂತೇನೆ। ಕೇಸರಿ ಜೋಳಾನ।
ದೇಶದೇಳ್ಗೆಗಾಗಿ। ಹಾಸ್ಯವ ಸಹಿಸಿದ। ಮಹಾತ್ಮರನ.
ಮಹಾತ್ಮರನ ಬೀಸುತ ನಾನು ನೆನೆದೆನ ॥ ಪ॥

ಆಳಬ್ಯಾಡ ನನ ಕಂದಾ। ಬೆಳಗಾಗ ಬಂದದ।
ಕೋಳಿ ಕೂಗುದು ಕೇಳ। ಕೇಸರತಾವ ಎಳೆಬಿಸಿಲ।
ಎಳೆಬಿಸಲ ಮೂಡುತ ಇನ್ನ ಮುಂದ ಬರತದ ॥ ೧

ಬಂದಿಲ್ಲಿ ಮಲಗವ್ವ ಎಡತೊಡಿಯ ಮೇಲ್ ಬಂದು।
ಚಂದದಿ ಹೇಳುವೆ। ತಂದೆ ಮಹಾತ್ಮರ ಕಥೆಯನ್ನಾ। ನಾ
ತಂದೆಮಹಾತ್ಮರ ಕಥೆಯನ್ನಾ ॥ ೨

ಪುಣ್ಯ ಭಾರತದೊಳಗ । ಪೋರಬಂದರದಲ್ಲಿ ।
ಪುಣ್ಯಾತ್ಮರೊಟ್ಟೆಲಿ ಹುಟ್ಟ್ಯಾನ ತಾನು । ಶುಭ ದಿನದಿ —
ಶುಭದಿನದಿ ಪುಣ್ಯಾತ್ಮರೊಟ್ಟೆಲಿ ಹುಟ್ಟ್ಯಾನ ॥ ೩ ॥

ತಾಯಿ । ಪುತಳಾಬಾಯಿ । ತಂದೆ ಕರಮಚಂದ
ಗಾಂಧಿ ಅಂತ ಅಡ್ಡ ಹೆಸರು। ಮನೆತನದ....
ಮನೆತನದ ಗಾಂಧಿ ಅಂತ ಅಡ್ಡ ಹೆಸರ ॥ ೪ ॥

ಹದಿಮೂರು ದಿವಸಕ್ಕ। ಬಂಧುಬಳಗ ತಾ ಬಂದ।
ಬಂದ ಮುತ್ತೈದೆರು । ತೊಟ್ಟಿಲ ತೂಗುತ ಪಾಡ್ಯಾರ—
ಪಾಡ್ಯಾರ ಮೋಹನನೆಂಬ ನಾಮ ಇಟ್ಟಾರ ॥ ೫ ॥

ಹುಣ್ಣಿವೆ ಚಂದ್ರಾಮ ಬೆಳದಂಗ ಬೆಳದಾನ ।
ಕಣ್ಣಿಗೆ ಚಂದ ಮೋಹನಚಂದ ಬೆಳದಾನ ।
ಬೆಳದಾನ ಬೆಳಕಿಗೆ ತಾನು ಬಂದಾನ ॥ ೬ ॥

ಸಣ್ಣವ ಇರುವಾಗ । ಅಣ್ಣನ ಮಾತ ಕೇಳಿ ।
ಬಂಗಾರ ಕಡೆ ಕದ್ದಾನವ ತಿಳಿಯದಲೆ—
ತಿಳಿಯದಲೆ ಅಣ್ಣನ ಕೂಡ ಜೈನಿ ಹೊಡದಾನ ॥ ೭ ॥

ತಂದಿ ಬಂದ್‌ಕೇಳಲು । ಇದ್ದ ಸಂಗತಿ ಹೇಳ್ಯಾನ ।
ಅಂದಿನಿಂದಲಿ ಸತ್ಯವ ಹಿಡಿದು । ನಡೆದಾನ—
ನಡೆದಾನ ಇಂದಿನವರಿಗು ನಡಿಸ್ಯಾನ ॥ ೮ ॥

ಭಾರತ ಸ್ವಾತಂತ್ರ್ಯಕಾಗಿ । ಬ್ಯಾರಿಸ್ಟರ ಕೆಲಸ ಬಿಟ್ಟ್ಯಾನ ।
ಭಾರತ ಜನರ ಕೂಡಿಸಿ ತಾನು । ನಡೆದಾನ—
ನಡೆದಾನ ಸತ್ಯಾಗ್ರವನು ಹೂಡ್ಯಾನ ॥ ೯ ॥

ತಂದಿ ಮೋಹನದಾಸನ । ಬಂದು ತಾವ್ ಹಿಡಿದಾರ
ಬಂದಿಖಾನ್ಯಾಗ ಇಟ್ಟಾರವನ್ನ । ಕೊಟ್ಟಾರ—
ಕೊಟ್ಟಾರ ನಾನಾತರದ ಕಷ್ಟವನಾ ॥ ೧೦ ॥

ಹಿಂದ ಮುಂದ ನೋಡವಲೆ । ಒಂವ ಸಂಕಟಕೆದುರಾಗಿ ।
ತಂದೆ ದೇವರನು ನೆನೆಯುತ ತಾವು । ನಡೆದಾರ ।
ನಡೆದಾರ ಭಂಗಿ ಕೆಲಸ ನುದ್ದ ಮಾಡ್ಯಾರ ॥ ೧೧ ॥

ಹರಿಜನರ ಸಲುವಾಗಿ । ತೊರೆದನಾ ಎಲ್ಲರನು ।
ಹರಿಜನ ಹುಡಿಗಿ ತಂದು ಮನಿವಳಗ ಸಲಿಹ್ಯಾರ ।
ಸಲಹ್ಯಾರ ಮಕ್ಕಳ ಸರಿ ತಾ ನೋಡ್ಯಾರ ॥ ೧೨ ॥

ದುಂಡು ಮೇಜಿನ ಪರಿಷತ್ತಿಗೆ । ಲಂಡನ್ನಿಗೆ ಹೋಗ್ಯಾನ ।
ನಡುಗಿಸಿ ಬಿಟ್ಟಾನ ಲಂಡನ್ನವ್ವ । ನಮ್ಮ ತಂದಿ ।
ನಮತಂದಿ ನಡುಗಿಸಿ ಬಿಟ್ಟಾನ ಲಂಡನ್ನ ॥ ೧೩ ॥

ಒಂದಿನಾ ಒಂದು ಮುದುಕಿ । ತಂದಿಗೆ ಕೇಳ್ಯಾಳ ।
ತಂದಿ ನಮ್ಮಪ್ಪಾ । ಒಂದು ದುಡ್ಡು ಕೊಡ । ಬಡವಿಗೆ—
ಬಡವಿಗೆ ತಿಂದು ಏನಾವರು ಬದುಕುವೆನಾ ॥ ೧೪ ॥

ಭಾರತ ಬಡತನವನು ನೋಡಿ । ಕೊರಗೀದ ಮನದಲ್ಲಿ ।
ಭಾರತಕೆ ಸುಖ ದೊರೆಯುವ ವರೆಗೆ ತ್ಯಜಿಸಿದರಾ—
ತ್ಯಜಿಸಿದರಾ ಸಿರಿಸುಖವನು ತಾವ್ । ತ್ಯಜಿಸಿದರಾ ॥ ೧೫ ॥

ಭಾರತಿಯರೆಲ್ಲರೂ । ಒಂದೆಂದು ಸಾರಿದರು ।
ಹಿಂದು, ಮುಸ್ಲಿಮ, ಕ್ರಿಶ್ಚನ್‌ರೆಲ್ಲ ಕೂಡಿದರು—
ಕೂಡಿದರು ಕೂಡಿ ಜೈಹಿಂದೆಹಾಡಿದರು ॥ ೧೬ ॥

ಒಂದಿನಾ ಮಹಾತ್ಮರು । ಸಂಜೆಯ ವೇಳೆಗೆ ।
ಪ್ರಾರ್ಥನಾ ಮಂದಿರಕ ಹೊರಟಾರವರು । ಬಂದಾನ...
ಯಮಬಂದಾನ ಬಂದ ಕಾಲಿಗೆ ಬಿದ್ದಾನ ॥ ೧೭ ॥

ಏಳುವ ನೆವ ಮಾಡಿ। ತೆಗೆದಾನ ಪಿಸ್ತೂಲ।
ಏಳುತ ಹಾರಿಸಿ ಮೂರು ಸಾರೆ ತಾನ। ಓಡ್ಯಾನ.
ಓಡ್ಯಾನ ಓಡುದರೊಳಗ ಸಿಕ್ಯಾನ ॥ ೧೮ ॥

ಹಾಯ್ ಎಂದು ಅಂದಾರ। ಬಾಯನ್ನು ತೆರೆದಾರ।
ರಾಮ ರಾಮ ಎಂದು। ಬೀಳುದರೊಳಗ ಕೂಡ್ಯಾರ.
ಕೂಡ್ಯಾರ ಬಿರ್ಲಾಭವನಕ ಒಯ್ದಾರ ॥ ೧೯ ॥

ಎಲ್ಲರೂ ಕೂಡ್ಯಾರ। ಹೌಹಾರಿ ಕೂತಾರ।
ಸ್ವಲ್ಪ ಹೊತ್ತಿನ ಮೇಲೆ। ಪ್ರಾಣ ಹಾರಿದ್ದು ಕೇಳಿ—
ಗೋಳಾಡ್ಯಾರ। ಮಕ್ಕಳಮರಿ ಸುದ್ದ ಅತ್ತಾರ ॥ ೨೦ ॥

ಸುತ್ತಲೂ ಹಬ್ಬಿತು। ಕತ್ತಲಾಗೂದರೊಳಗ।
ಅತ್ತು ಅತ್ತು ಜನ ಗೋಳಾಡಿದರು। ನೆನೆದರೆ —
ಈಗ ನೆನೆದರ ಕುತ್ತಿಗೆ ಶಿರ ತಾ ಬಿಗಿಯುವದ ॥ ೨೧ ॥

ಮತ್ತೆಂಗ ಮರಿಬೇಕ। ಮುತ್ತಜ್ಜ ಗಾಂಧಿನ್ನ ॥
ಹೊತ್ತು ಹೊತ್ತಿಗೆ ಆತನ ನೆನೆದರೆ। ದೇವರು—
ದೇವರು ಮುಕ್ತಿಯ ಕೊಡುವನು ನಮಗಿನ್ನು ॥ ೨೨ ॥

ಬೆಳಗಾತು ಏಳಪ್ಪ। ಗೆಳೆಯರು ಬಂದಾರ।
ಕಳೆಯದೆ ವೇಳೆಯ। ಪೋಗಿ ಮರಕೆ ನೀ। ಗಳಿಸಪ್ಪ
ವಿದ್ಯೆಗಳಿಸಪ್ಪ ಇಳೆಯೊಳು ಕೀರ್ತಿಯ ಪಡಿಯಪ್ಪ ॥ ೨೩ ॥

ಬೀಸುದು ಮುಗಿತಪ್ಪ। ಹೊಸ ಪದ ಹಾಡುದರೊಳಗ।
ಬಸವೇಶ್ವರನ ನೆನೆಯುತ ನಾನು। ತಿರುವೇನ—
ಕಲ್ಲತಿಂವೇನ ಬೀಸುದ ನಾನು। ಮುಗಿಸೇನ ॥ ೨೪ ॥

# ೨ ಹಂತಿಯ ಹಾಡು

ಕನ್ನಡ ನಾಡು ಚಂದ । ಕನ್ನಡ ಹಾಡು ಚಂದ ।
ಕರ್ನಾಟಕವು ಬಲು ಚಂದೋ || ಪ ||

ಕರ್ನಾಟಕವು ಬಲು ಚಂದೋ ಅದರಾಗ ||
ಧಾರವಾಡ ಜಿಲ್ಲಾ ಬಲು ಚಂದೋ ।
ಧಾರವಾಡ ಜಿಲ್ಲಾ ಬಲು ಚಂದೋ ಅದರಾಗ ||
ಹುಬ್ಬಳ್ಳಿ ತಾಲೂಕ ಬಲು ಚಂದೋ || ೧ ||

ಹುಬ್ಬಳ್ಳಿ ತಾಲೂಕ ಬಲು ಚಂದೋ ಅದರಾಗ ।
ಹುಬ್ಬಳ್ಳಿ ಊರ ಬಲು ಚಂದೋ ||
ಹುಬ್ಬಳ್ಳಿ ಊರ ಬಲು ಚಂದೊ ಅದರಾಗ ।
ಕನ್ನಡ ಮಕ್ಕಳ ಶಾಲೆ ಬಲು ಚಂದೋ || ೨ ||

ಕನ್ನಡ ಮಕ್ಕಳ ಶಾಲೆ ಬಲು ಚಂದೋ ಅದರಾಗ ।
ಚಿಕ್ಕಮಕ್ಕಳ ಆಟ ಬಲು ಚಂದೋ ||
ಚಿಕ್ಕಮಕ್ಕಳ ಆಟ ಬಲು ಚಂದೋ ಅದರಾಗ ।
ಆಟಆಡುವಾಗ ಪದ ಚಂದೋ || ೩ ||

ಆಟ ಆಡುವಾಗ ಪದ ಚಂದೋ ಅದರಾಗ ।
ಕೇಳವರು ನೀವಿದ್ರ ಬಲು ಚಂದೋ ||
ಕೇಳವರು ನೀವಿದ್ರ ಬಲು ಚಂದೋ ಅದರಾಗ ।
ಹಿರಿಯರಿದ್ದರೆ ಮಾತ್ರ ಬಲು ಚಂದೋ || ೪ ||

ಹಿರಿಯರಿದ್ದರೆ ಮಾತ್ರ ಬಲು ಚಂದೋ ಅದರಾಗ ।
ಒಂದಾಗಿ ನಡೆಯುವದು ಬಲು ಚಂದೋ||
ಒಂದಾಗಿ ನಡೆಯುವದು ಬಲು ಚಂದೋ ಅದರಾಗ ।
ಕನ್ನಡ ಬಾವುಟ ಏರಿಸುವದೊಂದು || ೫ ||

## ೩.

# ಹಾಳು ಹಂಪಿ

ಧಾಟಿಃ ಗಾಂಜಾ ಸೇದುನು ಬಾರಂಣ

ನಾವೆಲ್ಲರು ಕೂಡಿ ಎಂಬಂತೆ

ಹಂಪಿಗೊಗುನು ಬನ್ನಿರಿ । ವಿರುಪಾಕ್ಷಲಿಂಗನ । ದರ್ಶನ
ಪಡೆಯುನು ಬನ್ನಿರಿ । ದಕ್ಷಿಣ ಕಾಸಿ ಎಂಬ ಹೆಸರು
ಪಡೆದ ಹಂಪಿ ॥ ಪ ॥ ಹಂಪಿಗೊಗುನು ಬನ್ನಿ

ಮುಂದಿನ ಮಹಾದ್ವಾರಾ । ಇರುವದು ಬರ್ಪ್ಪರಾ ।
ಹನ್ನೊಂದತಂಸ್ತಿನ ಎತ್ತರ ಈ ದ್ವಾರಾ ॥ ೧ ॥ ಹಂಪಿ

ಮುಂದ ಮುಂದ ಹೋದರ । ಪೌಳಿಗಳ ವಿಸ್ತಾರಾ ।
ಮತ್ತೆ ಮತ್ತೆ ಹತ್ತುವವು । ಸಣ್ಣ ಸಣ್ಣ
ಮಹಾದ್ವಾರಾ ॥ ೨ ॥ ಹಂಪಿ

ಪಾರ್ವತಿ, ಪರಮೇಶ್ವರರಾ । ನವಗ್ರಹಗಳ ಪೂಜಿಸುವರ
ಪಾತಾಳೇಶ್ವರನ ದರ್ಶನ ಪಡೆಯುವರಾ ॥ ೩ ॥ ಹಂಪಿ

ಉತ್ತರಕ ಹೋದರ ಮತ್ತ ಒಂದು ದೊಡ್ಡ ದ್ವಾರಾ ।
ಆದರ ಎತ್ತರ ಕೇಳ್ರಿ ಒಂಬತ್ತಂತಸ್ತ ಪೂರಾ ॥ ೪ ॥ ಹಂಪಿ

ಮತ್ತ ಮುಂದ ಹೋದರ । ತುಂಗಭದ್ರಾ ಹೊಳಿ ಪೂರಾ ।
ಎಷ್ಟೇಳಲು ತೀರದು । ಆದರ ವಿಸ್ತಾರಾ ॥ ೫ ॥ ಹಂಪಿ

ಸಪ್ತಋಷಿಗಳ ನೆನಹು । ವಿದ್ಯಾರಣ್ಯರ ನೆನಹು
ಹಿಂದಿನದು ನೆನೆದರೆ । ಸುಗ್ರೀವಾಶ್ರಮ ನೆನಹು ॥೬॥ ಹಂಪಿ

ಹಿಂದಿನದು ನೆನೆಯೋಣ । ಹಾಳಂಪಿ ನೋಡೋಣ ।
ತಂದೆ ವಿರುಪಾಕ್ಷ ದೇವರ ಎಲ್ಲರು ನೆನೆಯೋಣ ॥೭॥ ಹಂಪಿ



## ೪. ಮಹಾತ್ಮರ ಭಜನಿಯ ಪದ.

ಧಾಟಿ ತಂಗೀ ರಾಟಿಯಿಂದು ನಮ್ಮ ಜೀವನವು ಎಂಬಂತೆ

ಭಜನೀ ಮಾಡುವ । ಬಾ ।
ಎಲ್ಲರು ಕೂಡಿ ನಾವು
ಭಜನಿ ಮಾಡುವ ಬಾ ॥ ಪಲ್ಲ ॥ ಭಜನಿ

ಯೇಸುಕ್ರಿಸ್ತ ಬಸವರಂದದಿ
ಮಹಿಮೆ ತೋರಿದ ಮಹಾತ್ಮರ ॥ ಅ. ಪ ॥

ಹರಿಜನರ । ಸೇವೆಯನು ಮಾಡಿದ ।
ಪರಮ ಪೂಜ್ಯ ತಂದಿಯ ।
ಹರಿಯ ಅವತಾರದಲಿ ಜನಿಸಿದ ।
ಮೋಹನದಾಸ ಗಾಂಧಿಯ ॥ ೧ ॥ ಭಜನಿ

ಪುಧಳಾಬಾಯಿಯ ಉದರದಿ ।
ಜನಿಸಿದಾ । ಗುರುಪುತ್ರನ ।
ಭಕ್ತಿಭಾವ । ಭಜನೆಯಿಂದಲಿ ।
ಮುಕ್ತಿಗೊಳಿಸುವ । ಗಾಂಧಿಯ ॥ ೨ ॥ ಭಜನಿ

ಸತ್ಯ ಅಹಿಂಸೆಯ । ಮಾರ್ಗದಿಂದಲಿ ।
ನಿತ್ಯದಲಿ ನಡೆದಾತನ ।
ಶಾಂತಿ ಸಾಗರದಲ್ಲಿ ನಲಿದಾ ।
ಧರ್ಮಮೂರ್ತಿ ಗಾಂಧಿಯ ॥ ೩ ॥ ಭಜನಿ

# ೫. ಜೋಗ ಫಾಲ್ಸ್

ಧಾಟಿ ಮಾಡಬೇಕೊ ಗಾಂಜಿಯ ತಲಬ ಎಂಬಂತೆ

ನೋಡೊ ನೋಡೊ ಜೊಗದ ಸೌಂದರ್ಯ ।
ಮೇಲಿಂದ ನೀರು ಬೀಳುವ ಚಮತ್ಕಾರ್ಯ ।
ಗುಡ್ಡದ ಮೇಲಿಂಪ ಬೀಳುವ ಚಮತ್ಕಾರ್ಯ ॥ಪ॥

ನದಿ ಶರಾವತಿ । ನಾಲ್ಕುಭಾಗವಾಗಿ ।
ಬಂದು ಬೀಳ್ವದು ಚಂದದಿಂದಲಿ ।
ಸಂದಿಗೊಂದಿಯೊಳು । ಬೀಳುತ ತಾನು ।
ಒಂದಾಗಿ ಹೋಗ್ವದು । ಮುಂದೆ ಕೊಳ್ಳದೋಳ್
॥೧॥ ನೋಡೊ ನೋಡೊ

ಎಡಬಲಕಿರುವವು । ಚಂದ ಬಂಗ್ಲೆಗಳು ಅಲ್ಲಿ
ದಡ ದಡ ಬೀಳುವ । ಸಪ್ಪಳ ಕೇಳ್ವದು ।
ಗಡಿಬಿಡಿಯಿಂದಲಿ । ಹಕ್ಕಿಗಳು ತಾವ್ ।
ಸಡಗರದಿಂದಲಿ । ಹಾಡುತಲಿರುವವು ॥೨॥ ನೋಡೊ

ಮುಂದೆ ಮೈಲಿನ ಮೇಲೆ ಬಂದು ಕಟ್ಟಿರುವರು ।
ಚಂದದಿಂದಲಿ । ಜೋಗ ಫಾಲ್ಸನು ।
ಬಂದು ಬಂದು ಜನ । ನೋಡಿಹೋಗ್ವರು । ಅದ
ರಿಂದ ಮುಂದೆ ವೈದಿರುವರು ವಿದ್ಯುತ್ತನು ॥೩॥ ನೋಡೊ

ಇಳಿದೇರುವ ಯಂತ್ರದ । ಸಲಕರಣೆ ।
ಥಳಥಳ ಹೊಳೆಯುವ । ಯಂತ್ರದ ಜೋಡಣೆ ।
ಝುಳು ಝುಳು ಹರಿಯುವ ನೀರಿನ ಝರಿಗಳ ।
ವರ್ಣಿಸಲಾಗದು ಸೃಷ್ಟಿಸೌಂದರ್ಯವ ॥೪॥ ನೋಡೊ



## ೭ ಆರತಿಯ ಪದ

ಧಾಟಿ ಕರ್ನಾಟಕಾಂಬೆ ನೀ ಧನ್ಯ ಧನ್ಯ ಎಂಬಂತೆ

ಆರತಿಯ ಬೆಳಗುವೆವು । ಭಾರತ ಮಾತೆ ।
ಪುರಜನರು ಹರುಷದಲ್ಲಿ । ಪೂಜಿಸೆವು ಮಾತೆ ॥ ಪ ॥

ಶ್ರೀ ಮಹಾತ್ಮಾಗಾಂಧಿ ಶ್ರೀಮಂತ ನೆಹರುಗಳು
ಶ್ರೀ ಮಹಾರಣಶೂರ ಸುಭಾಷರು ಸಿನಗೆ ।
ಭಾರತದ ವೀರರು । ಭಾರತೀಯರು ಸಹಿತ ।
ಭರದಿಂದ ಬೆಳಗುವೆವು । ರನ್ನದಾರುತಿಯಾ ॥ ೧ ॥ಆರತಿಯ



## ೭.

## ಮದುವೆಯ ಹಾಡು

### ತಂಗಿ ಅಣ್ಣನ ಕಾಲುಹಿಡಿದಾಗ್ಗೆ

ಅಣ್ಣ — ಬಾಗಿಲ ಬಾಗಿಲ ತೋಳಬಿಡ ತಂಗಿ ಕಾಲ ॥
ಜೋಡು ವಂಕಿಯು ಕೊಡುವೆ ।
ಮಾಡಿಸಿ ಬಳೆ ಕೊಡುವೆ ।
ಜೋಡೆತ್ತಿನ ಮೇಲೆ ಕಳಿಸಿ ನಾ ಬರುವೆ ॥
ಬಾಗಿಲ....

ತಂಗಿ—ಜೋಡು, ಬಳೆ, ವಂಕಿಗಳ ।
ಮಾಡಿಸುವದು ಬೇಡ ।

ಜೋಡೆತ್ತಿನ ಮೇಲೆ ಕಳಿಸುವದು ಬೇಡ ।
ಜೋಡು ಬಳೆ ವಂಕಿಗಳ ಇಡುವ ಮಗಳನ
ಕೊಡು ನೀ ನಮಗ ‖ ೧ ‖ ಬಾಗಿಲ

ಅಣ್ಣ—ಕಂಠಿ ಸರ ಕೊಡತೇನಿ ।
ಮಂಟಪದೊಳು ನಡಿಯೆ । ಮತ್ತೆ
ಗೆಜ್ಜೆಯ ಟೀಕಿ ಕೊಡುವೆ ನಾನು ‖
ಬಾಗಿಲ

ತಂಗಿ—ಕಂಠಿ ಸರ ನಾನೊಲ್ಲೆ
ಮಂಟಪದೊಳಿನ್ಯಾಕ ।
ಗೆಜ್ಜಟೀಕಿ ಸರವು ನಮಗೆ ಬೇಡ ।
ಕಂಠಿಸರ ಇಡುವಂಥ ಮುತ್ತಿನಂತಾ ಮಗಳ
ಕೊಡ ನಮಗ ‖ ೨ ‖ ಬಾಗಿಲ

ಅಣ್ಣ—ಸರಗಿ ವಾಲೆಯ ಕೊಡುವೆ ।
ಕರೆವ ಗೋವನು ಕೊಡುವೆ ।
ಕರೆಯುವ್ವ ತಂಗಿ ನಿನ್ನ ನಲ್ಲನನ್ನ ‖ ಬಾಗಿಲ

ತಂಗಿ—ಸರಗಿವಾಲಿಗಳೇಕೆ ।
ಕರೆವ ಗೋವನು ಏಕೆ ।
ಕರೆವುದಿನ್ನೆಕೆ ಎನ್ನ ನಲ್ಲನನ್ನ
ಸರಗಿ ವಾಲಿಗಳಿಡುವ ಚಿನ್ನದಂತಾ ಮಗಳ
ಕೊಡ ನಮಗ ‖ ೩ ‖ ಬಾಗಿಲ

ಅಣ್ಣ—ಬೇಕಾದ ಹಣ್ಣುಗಳ ।
ಸಾಕಷ್ಟು ಕೊಡಿಸುವೆನಾ ।
ಸಾಕಿ ಸಲಹುವ ಮಗಳ ನಾ
ಕೊಡಲಾರೆ ‖ ಬಾಗಿಲ

ತಂಗಿ—ಬೇಕಾದ ಹಣ್ಣುಗಳು।
ಸಾಕಷ್ಟು ಇವೆಯಣ್ಣ।
ಸಾಕು ಸಾಕಾಗಿಹುದು ತಿಂದು ತಿಂದು।
ಸಾಕಿ ಸಲುಹಿದ ಮುದ್ದು ಗುಣಶೀಲ ನಿನ್ನ ಮಗಳ
ಕೊಡ ನಮಗ ॥ ೪ ॥ ಬಾಗಿಲ

ಅಣ್ಣ—ಹಿರಿಯರಿರುವರು ತಂಗಿ
ಕರೆದು ಕೇಳುವೆ ನವ್ಮ್ಮ
ಹಿರಿಯರಿದ್ದು ಹೆಂಗ ಮಾತ ಕೊಡಲಿ ॥
ಬಾಗಿಲ

ತಂಗಿ—ಹಿರಿಯರೊಪ್ಪಿಸು ಕಾರ್ಯ। ಈ
ಗರತಿಗೆ ಕೂಡೇದ।
ಮರೆತಿರುವಿ ನಿನ್ನ ಮಡದಿಯು ಕೇಳೆ।
ಹಡೆದ ಮಗಳನು ನಮಗ
ಕೊಡುವದಕ ಹೇಳ ॥ ೫ ॥ ಬಾಗಿಲ

ಅಣ್ಣ—ಮಡದಿಯು ನಿನ್ನೇನು ಕೇಳುವದು ನನ ತಂಗಿ।
ಮಡದಿಯ ನಸುನಗು ಹೇಳುವದು ಕೇಳ।
ಹಡೆದ ಮಗಳನು ಕೊಡವೆ ನೀ
ಕಾಲು ಬಿಡ ॥ ಬಾಗಿಲ

ತಂಗಿ—ವಪ್ಪಿತಿದು। ನಮ್ಮಣ್ಣಾ।
ತಪ್ಪದಿರು ಮಾತಣ್ಣ।
ವಪ್ಪಿ ಸಭೆಯೊಳು ನೀನು ಹೇಳಿದ ಮೇಲೆ। ನನ
ಗೊಪ್ಪಿದಳು ನಿನ ಮಗಳು ಬಿಟ್ಟೇನಿ ನೋಡ
ಕಾಲ ॥ ೬ ॥ ಬಾಗಿಲ

❖

## ೮. ಮಹಾತ್ಮಾಗಾಂಧಿ

ಧಾಟಿ ತೇರನೆಳೆಯುತಾರ ತಂಗಿ ಎಂಬಂತೆ

ಧನ್ಯ ಧನ್ಯ ಮಹಾತ್ಮಾಗಾಂಧಿ ।
ಭಾರತ ಸ್ವಾತಂತ್ರ್ಯ ಪಡೆದಂಥ ತಂದಿ ।
ದುಂಡು ಮೇಜಿಗೆ ಹೋದನು ಗಾಂಧಿ !
ಲಂಡನ್ನ ನಡುಗಿಸಿ ಬಿಟ್ಟಾನು ತಂದಿ
ಖಾದಿಯ ಟೊಪ್ಪಿಗೆ ಹಾಕಿದ ಗಾಂಧಿ ॥ ೧ ॥ ಧನ್ಯ ಧನ್ಯ

ಹರಿಜನ ಸೇವೆಯ ಮಾಡಿದ ಗಾಂಧಿ ।
ಶಿರಿಯನೆಲ್ಲ ದೂಡಿದ ತಂದಿ ।
ಹರಿಯ ಅವತಾರದಿ ಜನಿಸಿದ ಗಾಂಧಿ ॥ ೨ ॥ ಧನ್ಯ ಧನ್ಯ

ಜಾತಿ ಎಲ್ಲಿ ಒಂದೇ ಎಂದು ।
ಮಾತೆ ಧ್ವಜವನು ಹಿಡಿಯಿರೆಂದು ।
ಹೇಳಿದಾ ಮಹಾತ್ಮಾಗಾಂಧಿ ॥ ೩ ॥ ಧನ್ಯ ಧನ್ಯ

ಹೀನ ಜನರ ಕಷ್ಟ ಸಹಿಸಿ ।
ಜ್ಞಾನದಿಂದ ವಿಶ್ವತಣಿಸಿ ।
ಕರಮಚಂದ ಕುಮಾರ ಗಾಂಧಿ ॥ ೪ ॥ ಧನ್ಯ ಧನ್ಯ

ಸತ್ಯದಿಂದ ನಡೆದ ಗಾಂಧಿ ।
ಸ್ತುತ್ಯಜಗಕೆ ಮಾಡಿ ತಂದಿ ।
ಸ್ವಾತಂತ್ರ್ಯ ಗಾಳಿ ಬೀರಿದ ಗಾಂಧಿ ॥ ೫ ॥ ಧನ್ಯ ಧನ್ಯ



## ೯.

# ಮದುವೆಯ ಹಾಡು

### ಅರಿಷಿಣ ಹಚ್ಚುವಾಗ್ಗೆ (ಸೋಬಾನ ಪದ)

ಸೊಬಾನವೆನ್ನಿರೆ । ಸೋಬಾನವೆನ್ನಿರೆ ।
ಸೋಬಾನವೆನ್ನಿ । ಶಿವನನ್ನೆ ಸೋಬಾನವ್ವ ॥ ಪ ॥ ಸೊ ...

ಮುತ್ತೈದೆರೆಲ್ಲರೂ । ಜತ್ತಾಗಿ ಒನ್ನಿರಿ ।
ಮತ್ತ ಮದಿಮಕ್ಕಳನ ಕರೆಯಿರೆ ॥ ೧ ॥ ಸೊ ...

ಮತ್ತ ಮದಿಮಕ್ಕಳನ । ಕರೆಯಿರಿ ಬೇಗನೆ ॥
ಒತ್ತರದಿ ಶಾಸಿಯ । ಹೊಯ್ಯಿರವ್ವ ॥ ೨ ॥ ಸೊ ...

ಕರಿಯ ಕಂಬಳಿ ತಂದು । ಕರಿಮುಂದೆ ಮಾಡಿ ನೀವ್ ।
ಜೋಳದ ಶಾಸಿಯ । ಹೊಯ್ಯಿರವ್ವ ॥ ೩ ॥ ಸೊ

ಜೋಳದ ಶಾಸಿಯ । ಹೊಯ್ದು ಮೇಲೆ ನೀವು ।
ಬಳಗದ ಜನರ ಕರಿರವ್ವ ॥ ೪ ॥ ಸೊ....

ಬಳಗದ ಜನರ ಕರೆದು ನೀವೆಲ್ಲಾರು ।
ಬಳಗದ ಉಡಿಯ ತುಂಬಿರವ್ವ । ॥ ೫ ॥ ಸೊ ...

ಅರಿಷಿಣ ಕುಂಕುಮ ಹಚ್ಚಿ । ಸಡಗರದಿಂದಲಿ ।
ಹರುಷದಿ ಆರತಿಯ ಬೆಳಗಿರೆ ॥ ೬ ॥ ಸೊ ⁝

—o—

## ೧೦. ಕನಸು

ರಾಗ ಮಾಯಾಮಾಳವಗೌಳ     ತಾಳ. ಏಕತಾಳ

ಬಿದ್ದಿತ್ತು ಕನಸು ಬಿದ್ದಿತ್ತು ಎದೆಯ ಕದವ ತೆಗೆದು
ಇದು ಹೊಕ್ಕಿತ್ತು ಒಳಹೊಕ್ಕಿತ್ತು ॥ ಪ ॥

ಕಲ್ಲಪೂಜೆಗೆ ತಾನು ಹೊರಟಿತ್ತು ।
ನಲ್ಲನಿಲ್ಲೆಂದು ಮನದಲಿ ನೊಂದಿತ್ತು ।
ಕಲ್ಲ ಮನಸನು ತಾ ಮಾಡಿತ್ತು ।
ಮಲ್ಲಿಕಾರ್ಜುನನ ಮನದಲ್ಲಿ ನೆನೆದಿತ್ತು ॥ ೧ ॥ ಬಿದ್ದಿತ್ತು

ಲೋಕಸುಂದರಿ ತಾನು ಆಗಿತ್ತು ।
ಮತ್ತೆ ಏಕಾಂಗಿಯಾಗಿ ತಾನ್ ಹೊರಟಿತ್ತು ।
ಏಕಾಏಕಿ ನನಗೆ ಕೂಡಿತ್ತು ।
ಬೇಕುಬೇಡಾದನೆಲ್ಲ ನನಗೆ ಹೇಳಿತ್ತು ॥ ೨ ॥ ಬಿದ್ದಿತ್ತು

ಸಂಜೆಮುಂಜಾವಿನಲಿ ಬಂದ್ಹೋಗುತ್ತಿತ್ತು ।
ಮಂಜುಳನಾದದಿ ತಾನ್ಹಾಡುತ್ತಿತ್ತು ।
ಅಂಜದಲೆ ಅಳುಕದಲೆ ಮನವ ಬಿಚ್ಚಿತ್ತು ।
ಮಂಜುಳ ನಾದೆನ್ನೆದೆಯ ನಟ್ಟಿತ್ತು ॥ ೩ ॥ ಬಿದ್ದಿತ್ತು

ನಸುನಗುತ ತಾನು ಹೊರಗೆ ಹೊರಟಿತ್ತು ।
ಹಸರು ಪತ್ತಲವನ್ನು ತಾನು ಉಟ್ಟಿತ್ತು ।
ಕಸವಿಸಿಯ ಮನಸು ತಾನು ಮಾಡಿತ್ತು ।
ಏಸು ಜನ್ಮದ ಕರ್ಮ ಎಂದೆನ್ನುತ್ತಿತ್ತು ॥ ೪ ॥ ಬಿದ್ದಿತ್ತು

ಕ್ಷೀರಸಾಗರದಂತೆ ಮನಸ್ಸು ಹಬ್ಬಿತ್ತು ।
ಕರೆದು ಅಲ್ಲಿಗೆ ನನ್ನನ್ನೂ ಹೊರಟಿತ್ತು ।

ಪರಿಪರಿಯಿಂದಲಿ ಎಲ್ಲ ಹೇಳಿತ್ತು ।
ಕರಕಮಲ ಮುಗಿದು ಎನಗೆ ಬೇಡಿತ್ತು ॥ ೫ ॥ ಬಿದ್ದಿತ್ತು

ಕೋಳಿ ಕೂಗಿತು ಆಗ ಕೇಳಿ ಎಚ್ಚತ್ತೆ।
ಸುಳುವು ಇಲ್ಲದ ನೋಡಿ ಮತ್ತೆ ಬೇಸತ್ತೆ।
ಗಾಳಿಯ ಜುಳುಜುಳು ನಾದವ ಕೇಳುತ್ತ।
ಕಳೆದೆ ರಾತ್ರಿಯನ್ನು ನಾನಃ ಆವತ್ತೆ ॥ ೬ ॥ ಬಿದ್ದಿತ್ತು



## ೧೧. ಮನೆಯ ಹಾಡು

### ಒಳಕಲ್ಲ ಪೂಜೆ

ಕನ್ನಡಿಗರೆಲ್ಲರು । ಒಂದಾಗಿ ಕೂಡೋಣ ।
ಕನ್ನಡ ತಾಯಿಯ ಸೇವೆ ಮಾಡೋಣರವ್ವ ॥ಪಲ್ಲ॥ ಸುವಿ

ಕನ್ನಡ ತಾಯಿಯ ಸೇವೆ । ಮಾಡೋಣ ನಾವಿನ್ನು।
ಕನ್ನಡ ನಾಡ ಕಟ್ಟೋಣರವ್ವ ॥ ೧ ॥ ಸುವಿ

ಕನ್ನಡ ನಾಡ ಕಟ್ಟೋಣ । ಇನ್ನ ಮುಂದ ।
ಹೊನ್ನಿನ ರಾಶಿ ಹರಿಸೋಣರವ್ವ ॥ ೨ ॥ ಸುವಿ

ಹೊನ್ನಿನ ರಾಶಿ ಹರಿಸೋಣ । ಇನ್ನ ಮುಂದ ।
ಆನಂದದಿ ದಿನಗಳ ಕಳೆಯೋಣರವ್ವ ॥ ೩ ॥ ಸುವಿ

ಆಳಾಗಿ ದುಡಿಯೋಣ । ಅರಸಾಗಿ ಉಣ್ಣೋಣ ।
ಆಳರಸರ ಕೀರ್ತಿ ತೆರೋಣರವ್ವ ॥ ೪ ॥ ಸುವಿ

ಒಳಕಲ್ಲ ಪೂಜೆಗೆ ಬರಬೇಕ ಎಲ್ಲರು ।
ಬಾಳಿ ಸೌಖ್ಯದಿ ಕಾಲ ಕಳಿಬೇಕರವ್ವ ॥ ೫ ॥ ಸುವಿ

ಬಾಳಿ ಸೌಖ್ಯದಿ ಕಾಲ ಕಳಿಬೇಕ । ಎಲ್ಲರು ।
ಇಳೆಯೊಳು ಕೀರ್ತಿಯ ಪಡಿಬೇಕರೆವ್ವ ॥ ೬ ॥ ಸುವಿ

ಜಾತಿಪಂಧವ ಮರೆತು । ನೀತಿಯಿಂದಲಿ ನಡೆದು ।
ಖ್ಯಾತಿಯನ್ನು ನಾವು ಪಡೆಯೋಣರವ್ವ ॥ ೭ ॥ ಸುವಿ

ಮೇಲು ಕೀಳುಗಳೆಂಬ । ಭೇಧ ಭಾವ ಅಳಿದು ।
ಎಲ್ಲರೊಂದಾಗಿ ನಡೆಯೋಣರವ್ವ । ನಾವಿನ್ನು ॥ ೮ ॥ ಸುವಿ

ಎಲ್ಲರೊಂದಾಗಿ ನಡೆಯೋಣ । ನಾವಿನ್ನು
ಕ್ಷುಲ್ಲಕ ಗುಣಗಳ ಅಳಿಯೋಣರವ್ವ ॥ ೯ ॥ ಸುವಿ

ಕ್ಷುಲ್ಲಕ ಗುಣಗಳ ಅಳಿಯೋಣ । ನಾವಿನ್ನು
ಮಲ್ಲಿಕಾರ್ಜುನನ ನೆನೆಯೋಣರವ್ವ ॥ ೧೦ ॥ ಸುವಿ



## ೧೨. ನಾವಾಡಿಗರ ಹಾಡು

ಧಾಟಿ: ನಾಗಸ್ವರ (ಪುಂಗಿ ಬಾರಿಸುವಹಾಗೆ)

ಸಮುದ್ರ ನೋಟ ನೋಡಾಕ ಚಂದೊ ॥
ಸಮುದ್ರದೊಳಗಿನ ನಾವ ಚಂದೊ ॥ ಪ ॥ ಹೌದ ನೋಡೊ

ನಾವೀನ ಓಟ ನೋಡಾಕ ಚಂದೊ ।
ನಾವಾಡಿಗರ ಹಾಡು ಚಂದೊ ॥ ೧ ॥

ಸಮುದ್ರ ದಂಡಿ ಊರ ಚಂದೊ ।
ಗೋಕರ್ಣ ಕ್ಷೇತ್ರ ಆದರಾಗ ಚಂದೊ ॥ ೨ ॥

ಕೋಟಿ ತೀರ್ಥ ಸ್ನಾನ ಮಾಡುರು ಬಂದು ॥
ಗಣಪತಿ ದರ್ಶನ ಪಡೆವರು ಮುಂದೆ ॥ ೩ ॥

ಮಹಾಬಳೇಶ್ವರ ದರ್ಶನ ಅಂದು ।
ಪಾರ್ವತಿ ದರ್ಶನ ಮಾಡುರು ಬಂದು ॥ ೪ ॥

ಎಲ್ಲರ ದರ್ಶನ । ಮಾಡುತ ಅಂದು ।
ಸಮುದ್ರ ಸ್ನಾನಕೆ ಹೋಗ್ವರು ಮುಂದೆ ॥ ೫ ॥

ವೆಂಕಟರಮಣನ ಗುಡೀಗೆ ಬಂದು ।
ಚಂದ್ರಕಾಳಿ ರಾಮತೀರ್ಥ ನೋಡುರು ಮುಂದೆ ॥ ೬ ॥

ಗೋಗರ್ಭ ಜಟಾತೀರ್ಥ ನೋಡುರು ಬಂದು ॥
ಗೋಕರ್ಣದಲಿ ಕಾಲ ಕಳೆವರು ಅಂದು ॥ ೭ ॥

ಸೃಷ್ಟಿಸೌಂದರ್ಯ ನೋಡುದು ಚಂದೊ ।
ಸೃಷ್ಟಿಕರ್ತನ ನೆನೆಯುದು ಚಂದೊ ॥ ೮ ॥



## ೧೩. ಸಾಕಪ್ಪಾ ಸಾಕು

ಧಾಟಿ: ಸಾಕಪ್ಪ ಮದುವೆಯ ಸುಖ ಸಾಕೊ (ರಿಕಾರ್ಡ)

ಸಾಕಪ್ಪ ಮದುವೆಯ ಸುಖ ಸಾಕೊ ।
ಇನ್ನ ಜೋಕಿನ ಮೋಹಿನಿ ಕಾಟ ಸಾಕೊ ॥ ಪ ॥

ಮದುವೆ ಮದುವೆಯೆಂದು । ಮದುವೆ ಮೊದಲು ಜೆಂದ ।
ಮದುವೆಯಾದವರ । ಗತಿ ನಾಯಿಯೆಂದ ॥ ೧ ॥

ಒಳ್ಳೆ ಹುಡಗಿ ಎಂದು । ಮಳ್ಳಾಗಿ ಮದಿವ್ಯಾದೆ ।
ಜಳ್ಳ ಹಣ್ಣ ತಿನ್ನಿದ್ದಿಕಿ। ಮಳ್ಳ ನನ್ನ ನೋಡಿಕ್ಯಾಸ ॥ ೨ ॥



## ೧೪. ಭಾರತಾಂಬೆಯು ಮುಕ್ತಳಾದಳು

ಧಾಟಿ ಡೋಣಿ ಸಾಗಲಿ ಮುಂದೆ ಹೋಗಲಿ ಎಂಬಂತೆ

ಭಾರತಾಂಬೆಯು ಮುಕ್ತಳಾದಳೈ
ಭರದಿ ಬೆಳಗಿರೆ ಮುತ್ತಿನಾರುತಿ ॥ ಪ ॥

ದುಷ್ಟ ರಾವಣಾ ಸೀತೆನೊಯ್ದಾಗ
ಶಿಷ್ಟ ರಾಮನು ಬಿಡಿಸಿ ತಂದನು ॥ ೧ ॥ ಭಾರ

ಸತ್ಯ ದ್ರೌಪತಿಯ ಶೀರೆ ಸೆಳೆವಾಗ
ಸ್ತುತ್ಯ ಕೃಷ್ಣನು ಮಾನ ಉಳಿಸಿದಾ ॥ ೨ ॥ ಭಾರ

ಸೀತಾ ದ್ರೌಪತಿಯಾಬಿಡಿಸಿದಾಪರಿ
ಮಾತೆಯು ಸೆರೆಯನು ಮಹಾತ್ಮರು ಬಿಡಿಸಿಹರ್ ॥ ೩ ॥
ಭಾರ

ಒಂದೇ ಮನದಲಿ ಕೂಡಿ ಪಾಡುವಾ
ಬಂದ ಚಿಂತೆಯ ದೂರಗೈವಳು ॥ ೪ ॥ ಭಾರ

ಅಲ್ಪಜ್ಞಾನದ ನಿಜಲಿಂಗೇಶನು
ಸ್ವಲ್ಪದರಲ್ಲಿಯೇ ಪದ್ಯ ಮುಗಿಸಿಹನ್ ॥ ೫ ॥ ಭಾರ

## ೧೫. —ಕಾಲ ಮಹಿಮೆ—

ಎಂಥಾ ಕಾಲಾ ಬಂದಿತ್ರಪ್ಪ।
ಇದು ನಮಗ।
ಇಥಾದೆಲ್ಲ ಕಂಡಿದ್ದಿಲ್ಲಾ।
ಭೂಮಿಮ್ಯಾಗ ॥ ಪಲ್ಲ ॥
ಮಾಡಿಕೊಂಡ ಗಂಡನ ಬಿಟ್ಟ।
ತಿರಗೂರಿಗ।
ಕೂಡಿಕೊಂಡ ಇರವ್ರಪ್ಪ।
ಕಂಡವರ್ನೀಗ। ॥ ೧ ॥
ಕಣ್ಣಿಗೆ ಚಾಳಿಸ ಪಾಲಾಗ ಚಪ್ಪಲ।
ಹಾಕುರೀಗ।
ಹೆಂಣಿನ ನೆಲಿ ತಿಳಿಯಲಿಲ್ಲ।
ಕಡಿತನ್ಕ ನಮಗ ॥ ೨ ॥

## ೧೬. ಮಗುವಿನ ಮರಣ

( ನನ್ನ ಚಿರಂಜೀವಿಯಾದ ಕುಮಾರ ಶಿವಾನಂದನು ತನ್ನ ೫ ನೆಯ ವರ್ಷದಲ್ಲಿ ಕೈಲಾಸವಾಸಿಯಾದಾಗ್ಗೆ ಮಾಡಿದ ಪದ )

ರಾಗ ಜೋಗಿಯಾ ತಾಳ : ಜಂಪಾ

**ಧಾಟಿ : ಹಾ ಗಾಂಧಿ ಹಾ ಗಾಂಧಿ ಎಂಬಂತೆ**

ಅಗಲಿದಿಯಾ ಮಗು ನೀನು।
ನೀಗಿದಿಯಾ ಭವಪಾಶ ॥ ಪ ॥

**ನಗೆಮೊಗದ ಮಗು ನಿನಗೆ।**
**ಈಗೈದು ವರುಷ ಕಳೆ।**

ಹಗಲಿರುಳು ಕುಣಿದಾಡಿ ।
ಆಗಲಿದಿಯಾ ಶಿವಯೋಗಿ ॥ ೧ ॥

ಕರೆಯಬಂದರೆ ಯಮನು ।
ಕರ ಮಾಡಿ ತೋರಿದಿಯಾ ।
ಮರ ಮರನೆ ಮರುಗುತ್ತ ತಾಯ್
ಕರ ಪಿಡಿದು ಪೇಳಿದಿಯಾ ॥ ೨ ॥

ವಿಷಮ ಜ್ವರದಿಂ ನೀನು ।
ಕಸವಿಸಿಯ ಬಟ್ಟಿಯಾ ।
ದಾಸ್ಯವನು ಹರಿಮೊಗೆದು ।
ಈಶನೊಳು ಸೇರಿದೆಯಾ ॥ ೩ ॥

ಎಲ್ಲಿ ಹುಡುಕಲಿ ನಿನ್ನ ।
ಬಲ್ಲ ಸುಕುಮಾರನೇ ।
ಸಲ್ಲು ಸಲ್ಲಿಗೆ ನಿನ್ನ ತಾಯ್
ಎಲ್ಲವನು ನೆನೆಯುವಳು ॥ ೪ ॥

ಬಾಲ್ಯದಲಿ ನೀನಿಂದು ।
ಕಲಿಯುಗದ ನೆಲೆ ತಿಳಿದು ।
ಮಲ್ಲಿಗೆಯ ದೇಹವನು ।
ಕಲ್ಲಾಗಿ ಮಾಡಿದೆಯಾ ॥ ೫ ॥

ಅಲ್ಲಿ ಹೇಳುವದೇನು ।
ಎಲ್ಲವನು ನೋಡಿರುವೆ ।
ಕಲಿಯುಗದಿ ನಡೆದಿರುವ
ಕಲಿರಾಯ ನಾಟ್ಯವನು ॥ ೬ ॥

ಚಿಕ್ಕವನು ನೀನಹುದು ।
ಚಿಕ್ಕಲ್ಲ ನಿನ್ನ ಮನ ।
ಚೊಕ್ಕ ಕನ್ನಡಿಯಂತೆ ।
ಚಕ್ಕನೆ ಬೆಳಗಿತ್ತು ॥ ೭ ॥

ಎಂತು ಮರೆಯಲಿ ನಾನು ।
ಶಾಂತಿ ಕುವರನೆ ನಿನ್ನ ।
ಚಿಂತೆಯಲಿ ಕಡುಬೆಂದು ।
ಎಂತು ನಾ ಜೀವಿಸಲಿ ॥ ೮ ॥

ನಿನ್ನೆನವು ನನಗಾಗಿ ।
ನೆನಸಿದಾಗೊಮ್ಮೆ ನೀ ।
ಕನಸಿನಲಿಯಾದರೂ
ಮನಸ್ಸನ್ನು ಸಂತೈಸು ॥ ೯ ॥

ನೊಂದವನು ನಾನಿಹೆನು ।
ಕೊಂದವನು ಯಮನಿಹನು ।
ಹೊಂದಿದವ ನೀನಿರುವೆ
ಶಿವನ ಕೈಲಾಸವನು ॥ ೧೦ ॥



# ಹಳ್ಳಿಯ ಹಾಡುಗಳು.

ರಚಿಸಿದವರು



ಶ್ರೀ ನಿಜಲಿಂಗಪ್ಪಾ ರಾಚಪ್ಪಾ ಕುಬಸದ

ಆದಷ್ಟು ಹಳ್ಳಿಯ ಹಾಡುಗಳು ಪ್ರಚಾರದಲ್ಲಿ ಬರಬೇಕಾಗಿವೆ ಯಂತ್ರಸಾಮುಗ್ರಿಗಳು ಬಂದ ಲಾಗಾಯಿತು ಹಳ್ಳಿಯ ಹಾಡುಗಳನ್ನು ಕೇಳುವದೇ ವಿರಳ. ತೊಟ್ಟಿಲ ತೂಗಿ ತೂಗಿ ತನ್ನ ಸ್ಥಳಕ್ಕೆ ನಿಲ್ಲುವ ಹಾಗೆ ಕಾಲ ಮೊದಲಿನ ಮಟ್ಟಿಗೆ ಬರತೊಡಗಿದೆ. ಇದಲ್ಲದೆ ಇಂಥ ಹಾಡುಗಳನ್ನು ಹಾಡುತ್ತ ಕೆಲಸಮಾಡುವದರಿಂದ ಮಾಡುವ ಕೆಲಸವು ಬೇಜಾರಾಗದು, ಕಾರಣ ತನಗೂ ಆನಂದ, ಕೇಳುವವರಿಗೂ ಆನಂದ.

ತಮ್ಮ

ಸಮಾಪ್ತಿ ॥